# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

ಸಂಪುಟ ೧ ಸಂಚಿಕೆ ೧೪ ಕೊಪ್ಪ ೨೧-೧೧-೮೨ ಭಾನುವಾರ ಬೆಲೆ ೪೦ ಪೈಸೆ



## ಕ್ಷೇತ್ರದಲ್ಲಿ ವಿರೋಧ ಪಕ್ಷಗಳ ಒಮ್ಮತದ ಅಭ್ಯರ್ಥಿಗೆ ದೃಢ ಯತ್ನ

**ಕೊಪ್ಪ : ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಮುಂಬರುವ ಚುನಾವಣೆಯಲ್ಲಿ ವಿರೋಧ ಪಕ್ಷಗಳ ಕಡೆಯಿಂದ ಒಮ್ಮತದ ಒಬ್ಬನೇ ಅಭ್ಯರ್ಥಿಯನ್ನು ನಿಲ್ಲಿಸಬೇಕೆಂಬ ಪ್ರಯತ್ನ ದೃಢವಾಗಿ ಮುಂದುವರಿದಿದೆ.**

ಆ ಅಭ್ಯರ್ಥಿ ನಿಜವಾದ ಅರ್ಥದಲ್ಲಿ ರೈತ ಪ್ರತಿನಿಧಿಯಾಗಿರಬೇಕು, ಜನಾನುರಾಗಿ ಯುವಕನಾಗಿರಬೇಕು ಎಂಬ ವಿಚಾರವೂ ದಿನದಿನಕ್ಕೆ ಹೆಚ್ಚೆಚ್ಚು ಪುಷ್ಟಿ ಪಡೆಯುತ್ತಿದೆ.

ಈ ನಿಟ್ಟಿನಲ್ಲಿ ನ. ೧೫ರಂದು ಇಲ್ಲಿ ನಡೆದ ಕ್ಷೇತ್ರದ ಮೂರೂ ತಾ||ಗಳ ವಿರೋಧ ಪಕ್ಷಗಳ ಪ್ರತಿನಿಧಿಗಳ ಸಭೆ ಒಂದು ದೃಢವಾದ ಹೆಜ್ಜೆ ಎನ್ನಲಾಗಿದೆ. ಜನತಾ, ಭಾಜಪ, ಕ್ರಾಂತಿ ರಂಗ ಮತ್ತು ಸಿಪಿಎಂ ಪಕ್ಷಗಳ ಪ್ರತಿನಿಧಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು.

ನ. ೨೮ರಂದು ಪುನಃ ಸಭೆ ಸೇರಲಿರುವ ಈ ಪ್ರತಿನಿಧಿಗಳು ತಮ್ಮ ಜಿಲ್ಲಾ ನಾಯಕರ ಸಮಕ್ಷಮದಲ್ಲಿ ಒಂದು 'ಸಮಾನ ವೇದಿಕೆ' ರಚಿಸಿಕೊಳ್ಳುತ್ತಾರೆ. ಅಭ್ಯರ್ಥಿಯನ್ನು ಆರಿಸುವ ಅಧಿಕಾರ ಮತ್ತು ಕಾರ್ಯಕ್ರಮಗಳಿಗೆ ನೇತೃತ್ವ ಕೊಡುವ ಜವಾಬ್ದಾರಿ ಈ ವೇದಿಕೆಯದಾಗಿರುತ್ತದೆಂದು ವಕ್ತಾರರು 'ಮುಂಜಾವು'ಗೆ ತಿಳಿಸಿದ್ದಾರೆ.

### ಸುಗಮವಲ್ಲ

ಈವರೆಗೆ ಎಲ್ಲ ಸುಗಮವಾಗಿ, ಅನ್ಯೋನ್ಯವಾಗಿ ನಡೆದಿದೆಯಾದರೂ, ಈ ಪ್ರಯತ್ನದ ನಿಜವಾದ ಸತ್ವ ಪರೀಕ್ಷೆ ಇರುವುದು ಅಭ್ಯರ್ಥಿಯ ಆಯ್ಕೆಯಲ್ಲಿ. ಕಾಂಗ್ರೆಸ್‌ಗೆ ಎದುರು ವಿರೋಧ ಪಕ್ಷಗಳ ಒಬ್ಬನೇ ಅಭ್ಯರ್ಥಿ ನಿಂತಲ್ಲಿ ಗೆಲ್ಲುವ ಸಾಧ್ಯತೆ ಖಚಿತ ಎಂದು ಹೇಳಲಾಗುತ್ತಿರುವ ಹಿನ್ನೆಲೆಯಲ್ಲಿ ಉಮೇದುವಾರಿಕೆ ಹಾಗೂ ನಂತರದ ಅಧಿಕಾರ ಸ್ಥಾನ ಯಾರಿಗೆ ಬೇಡ? ಯಾವ ಪಕ್ಷಕ್ಕೆ ಬೇಡ?

ಚುನಾವಣೆ ಅರ್ಥವನ್ನೇ ಕಳೆದುಕೊಂಡಿರುವಾಗ ಇದ್ದ ಅಲ್ಪ ಸ್ವಲ್ಪ ಆಸಕ್ತಿಯನ್ನು ಜನ ಈ ಸತ್ವ ಪರೀಕ್ಷೆಯಲ್ಲಿ ಕೇಂದ್ರೀಕರಿಸಿದ್ದಾರೆಂದು ಹೇಳಲಾಗುತ್ತಿದೆ.

## ದೊಂಬಿಕೋರನಿಗೆ "ಮುಗ್ಗಲು ಹುಡಿ!"

ಉತ್ತಮೇಶ್ವರ: ಹೆದ್ಸೆ ಕೃಷ್ಣಭಟ್ಟರ ಕೊಲೆ ಪ್ರಕರಣದಲ್ಲಿ ಖುಲಾಸೆಯಾಗಿ ಬಂದಿದ್ದ ಟಿ.ಕೆ.ನಾರಾಯಣ ನ. ೧೭ರ ರಾತ್ರಿ ಇಲ್ಲಿ 'ಮುಗ್ಗುಲು ಹುಡಿ' ಮಾಡಿಸಿ ಕೊಂಡನೆಂದು ತಿಳಿದು ಬಂದಿದೆ.

"ಉತ್ತಮೇಶ್ವರದಲ್ಲಿ ಹೊಡೆಯುವುದೇ ನನ್ನ ಕೆಲಸ" ಮುಂತಾಗಿ ಹೇಳಿಕೊಂಡು ಬಡಬಗ್ಗರನ್ನು ಬೆದರಿಸಿಕೊಂಡೇ ಬದುಕುತ್ತಿರುವ ಸುಮಾರು ೪೫ರ ಪ್ರಾಯದ ಈತ ಅಂದು ಕುಡಿದು ಮೂರ್ನಾಲ್ಕು ಜನರಿಗೆ ಥಳಿಸಿದಾಗ ದೇವಸ್ಥಾನದಲ್ಲಿ ಲಕ್ಷ್ಮಿ ಪೂಜೆಗೆ ಸೇರಿದ್ದ ಜನ ಒಟ್ಟಾಗಿ ವರ್ಷಾನುಗಟ್ಟಲೆಯ ಕೋಪ ತೀರಿಸಿದರೆಂದು ಹೇಳಲಾಗಿದೆ.

ಆದರೆ, ಈ ಕಾರ್ಯಾಚರಣೆಯಲ್ಲಿ ಬ್ರಾಹ್ಮಣ ಯುವಕರೇ ಹೆಚ್ಚಿದ್ದುದರಿಂದ ಅವನ ಪುಂಡಾಟಿಕೆ ಶಾಶ್ವತವಾಗಿ ಬಂದ್ ಆಗುವಷ್ಟು ಮಾಡಲು ಅವರಿಂದಾಗಲಿಲ್ಲ ಎನ್ನಲಾಗಿದೆ.

ರಾತ್ರಿಯಿಡೀ ಶರಾಬು ಅಂಗಡಿಯೆದುರು ಬಿದ್ದಿದ್ದ ಅವನನ್ನು ಮರುದಿನ ಕೊಪ್ಪ ಪೋಲೀಸರು ತೀರ್ಥಹಳ್ಳಿ ಆಸ್ಪತ್ರೆಗೆ ಸೇರಿಸಿದ್ದಾರೆ. ಅವನ ದೂರಿನ ಮೇಲೆ ಏಳೆಂಟು ಜನರನ್ನು ಬಂಧಿಸಿ ಜಾಮೀನಿನ ಮೇಲೆ ಬಿಡಲಾಗಿದೆ. ಆ ಪೈಕಿ ಮೂರ್ನಾಲ್ಕು ಜನರಿಗೆ ತೀವ್ರ ಪೆಟ್ಟಾಗಿದ್ದು ಚಿಕಿತ್ಸೆಗಾಗಿ ಶಿವಮೊಗ್ಗಕ್ಕೆ ಹೋಗಿದ್ದಾರೆಂದು ಹೇಳಲಾಗಿದೆ.

## ನ.ರಾ.ಪುರದಲ್ಲಿ ರೈತರ ಬೃಹತ್ ಮೆರವಣಿಗೆ, ಸಭೆ

ನ.ರಾ.ಪುರ: ತಾ|| ರೈತ ಸಂಘದ ಕರೆಯಂತೆ ಸುಮಾರು ೫೦೦ಕ್ಕೂ ಹೆಚ್ಚು ರೈತರು ನ. ೧೩ರಂದು ೧೫ ಟಿಲ್ಲರ್ ಹಾಗೂ ೩೦ಕ್ಕೂ ಹೆಚ್ಚು ಗಾಡಿಗಳೊಡನೆ ಬೃಹತ್ ಮೆರವಣಿಗೆ ನಡೆಸಿದರು. ನಂತರ ಜಿಲ್ಲಾ ರೈತ ಸಂಘದ ಅಧ್ಯಕ್ಷ ಟಿ.ಆರ್.ಶಂಕರ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಶಿವಮೊಗ್ಗ, ತೀರ್ಥಹಳ್ಳಿಗಳ ಮುಖಂಡರು, ತಾ| ರೈತ ಸಂಘದ ಅಧ್ಯಕ್ಷ–ಕಾರ್ಯದರ್ಶಿಗಳು ಮಾತನಾಡಿದರು.

## ಸಬ್ ಇನ್ಸ್‌ಪೆಕ್ಟರ್ ಲಕ್ಷ್ಮಣ್ ಅಮಾನತು?

ನ.ರಾ.ಪುರ: ಇಲ್ಲಿನ ಪೋಲೀಸ್ ಠಾಣಾಧಿಕಾರಿ ಆರ್.ಲಕ್ಷ್ಮಣ್‌ರವರನ್ನು ಅಮಾನತಿನಲ್ಲಿಡಲಾಗಿದೆಯೆಂದು ವರದಿಯಾಗಿದೆ. ೧೫ ದಿನಗಳ ಕಾಲ ಲಕ್ಕವಳ್ಳಿಯಲ್ಲಿ ಹೆಚ್ಚುವರಿ ಚಾರ್ಜ್ ನಿರ್ವಹಿಸುತ್ತಿದ್ದ ಅವರನ್ನು ಕುಂದಾಪುರಕ್ಕೆ ವರ್ಗ ಮಾಡಲಾಗಿತ್ತು. ಅಮಾನತಿನ ಬಗ್ಗೆ ಸ್ಪಷ್ಟ ಕಾರಣ ದೊರೆತಿಲ್ಲ.

ನ. ೧೭ರಿಂದ ಎಸ್.ಕೆ.ಪುಟ್ಟಪ್ಪ ಎಂಬವರು ಇಲ್ಲಿ ಠಾಣಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿದ್ದಾರೆ.

---

ರಷ್ಯದ ಅಧ್ಯಕ್ಷರಾಗಿದ್ದ ಲಿಯೋನಿದ್ ಬ್ರೆಜ್ನೆವ್ ನ. ೧೦ರಂದು ಹಠಾತ್ತನೆ ನಿಧನರಾದರು. ೭೫ ವರ್ಷ ವಯಸ್ಸಿನ ಅವರು ೧೯೬೪ರಿಂದ ರಷ್ಯದ ಅಧ್ಯಕ್ಷರಾಗಿದ್ದರು.

## ಬಾವಿಗೆ ಬಿದ್ದು ಮರಣ

ಉತ್ತಮೇಶ್ವರ: ಕೊಂಡಿಹೈಲು ಕಾಲೊನಿ ವಾಸಿ ಹರಿಜನರ ಗಿಡ್ಡಯ್ಯ ಎಂಬವರ ಮಗಳು ಸುಮಾರು ೨೨ ವರ್ಷದ ಕಮಲ ಎಂಬಾಕೆ ನ. ೧೪ರ ರಾತ್ರಿ ಬಾವಿಗೆ ಬಿದ್ದು ಸಾವನ್ನಪ್ಪಿದ್ದಾಳೆ. ತೋಟಗದ್ದೆಗಳ ಉತ್ತಮ ಕೆಲಸಗಾರ್ತಿಯೂ, ರಂಗೋಲಿ ಪ್ರವೀಣೆಯೂ ಆಗಿದ್ದ ಈಕೆಗೆ ಒಂದೆರಡು ವರ್ಷಗಳಿಂದ ಹಿಸ್ಟೀರಿಯಾ ಇತ್ತೆಂಬ ಮಾತು ಕೇಳಿ ಬಂದಿದೆ. ಕೊಪ್ಪ ಪೋಲೀಸರು ಜಯಪುರ ಸರ್ಕಾರಿ ವೈದ್ಯರ ಸಮ್ಮುಖದಲ್ಲಿ ಮಹಜರು ನಡೆಸಿದ್ದು ಇದು ಆತ್ಮಹತ್ಯೆಯೆ ಅಲ್ಲವೆ ಎಂಬುದು ತಿಳಿಯಬೇಕಾಗಿದೆ. ಆತ್ಮಹತ್ಯೆ ಮಾಡಿಕೊಳ್ಳುವಂಥ ಕಾರಣವೇನೂ ಇರಲಿಲ್ಲವೆಂಬ ಮಾತು ಸುತ್ತಮುತ್ತ ಕೇಳಿ ಬರುತ್ತಿದೆ.

## ರೈತ ಸಂಘದ ಧರಣಿ

ಶೃಂಗೇರಿ: ಎಂಟು ಅಂಶಗಳ ಬೇಡಿಕೆ ಈಡೇರಿಕೆಗಾಗಿ ನ. ೧೫ರ ವರೆಗೆ ಗಡುವು ನೀಡಿದ್ದ ತಾ|| ರೈತ ಸಂಘ ನ. ೨೩ರಂದು ಮೆರವಣಿಗೆ ಮತ್ತು ಸರದಿ ಧರಣಿ ಮುಷ್ಕರಕ್ಕೆ ಕರೆಕೊಟ್ಟಿದೆ.

ಮೆರವಣಿಗೆಯಲ್ಲಿ ರೈತ ಕಾರ್ಮಿಕರು ಕೊಂಬು–ಕಹಳೆ, ಎತ್ತಿನಗಾಡಿ, ಟಿಲ್ಲರ್, ಟ್ರಾಕ್ಟರ್ ಇತ್ಯಾದಿಗಳೊಂದಿಗೆ ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿ ಶಾಂತಿ–ಶಿಸ್ತಿನಿಂದ ವರ್ತಿಸಬೇಕೆಂದು ರೈತ ಸಂಘ ಮನವಿ ಮಾಡಿದೆ.

## ವಿನೋಬಾ ಇನ್ನಿಲ್ಲ

ಖ್ಯಾತ ಗಾಂಧೀವಾದಿ, 'ಭೂದಾನ ಯಜ್ಞ'ದ ಪ್ರವರ್ತಕ ವಿನೋಬಾ ಭಾವೆ ನ. ೧೫ರಂದು ತಮ್ಮ ೮೭ನೇ ವಯಸ್ಸಿನಲ್ಲಿ ನಿಧನರಾದರು. ಹೃದಯಾಘಾತದಿಂದ ಸ್ವಲ್ಪ ಚೇತರಿಸಿಕೊಂಡರೂ ಅನಂತರ ೭ ದಿನಗಳ ಕಾಲ ಆಹಾರ, ನೀರು, ಔಷಧ ಎಲ್ಲವನ್ನೂ ತ್ಯಜಿಸಿ, ಜೈನ ಸಂಪ್ರದಾಯದಂತೆ 'ಪ್ರಾಯೋಪವೇಶ'ದಿಂದ ಸಾವನ್ನು ಪಡೆದರು.

## ಮಕ್ಕಳ ದಿನಾಚರಣೆ

ಗುಡ್ಡೇತೋಟ: ಇಲ್ಲಿನ ಮೈತ್ರಿ ಶಿಶು ವಿಹಾರವು ಕು| ಬಿ.ಎಸ್.ಶ್ರೀಕಂಠನ ಅಧ್ಯಕ್ಷತೆಯಲ್ಲಿ ನ. ೧೪ರಂದು ಉತ್ಸಾಹದಿಂದ ಮಕ್ಕಳ ದಿನಾಚರಣೆ ಆಚರಿಸಿತು.

ಕು| ಸವಿತಾರಿಂದ ಪ್ರಾರ್ಥನೆ, ಕು| ಶೈಲಜಾರಿಂದ ಸ್ವಾಗತ, ಶಿಶು ವಿಹಾರದ ಶಿಕ್ಷಕಿ ಕು|ಜಿ.ವಿ.ನಾಗರತ್ನರಿಂದ ಮಕ್ಕಳ ದಿನಾಚರಣೆಯ ತಿಳಿವು ನೀಡುವ ಭಾಷಣ ನಡೆದವು. ಪಂ|| ಅಧ್ಯಕ್ಷರು ಮುಖ್ಯ ಅತಿಥಿಗಳಾಗಿದ್ದರು.

ಮಕ್ಕಳು ಮನರಂಜನೆ ಕಾರ್ಯಕ್ರಮ ನೀಡಿದರು. ಮೈತ್ರಿ ಮಹಿಳಾ ಸಮಾಜದ ಕಾರ್ಯದರ್ಶಿನಿ ಕು| ಜಿ.ಟಿ. ನಾಗರತ್ನ ವಂದಿಸಿದರು.

---



---

## ಚಿಕ್ಕಮಗಳೂರು ಡಿ.ಸಿ.ಸಿ. ಬ್ಯಾಂಕ್ ನೇಮಕಾತಿಯಲ್ಲಿ ಮೀಸಲಾತಿ ಉಲ್ಲಂಘನೆಯ ಆರೋಪ

ಚಿಕ್ಕಮಗಳೂರು: ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ಈಚೆಗೆ ಬೆರಳಚ್ಚುಗಾರರ ಮತ್ತು ಗುಮಾಸ್ತರ ಹುದ್ದೆಗಳನ್ನು ಭರ್ತಿ ಮಾಡುವಾಗ ಎ.ಬಿ.ಮಂಜಯ್ಯ ಎಂಬ ಪರಿಶಿಷ್ಟ ಜಾತಿಯ ಅಭ್ಯರ್ಥಿ ಸಂದರ್ಶನದಲ್ಲಿ ಉತ್ತಮವಾಗಿ ಉತ್ತರಿಸಿದ್ದರೂ ಆಯ್ಕೆಮಾಡದೆ ಉಷಾ ಎಂಬ ಬ್ರಾಹ್ಮಣ ಅಭ್ಯರ್ಥಿಯ ಆಯ್ಕೆ ಮಾಡಲಾಗಿದೆ; ಕಮಲಾಕ್ಷಿ ಎಂಬ ಅಭ್ಯರ್ಥಿಯನ್ನು ನಿಗದಿತ ವಯೋಮಿತಿಯನ್ನು ಉಲ್ಲಂಘಿಸಿ ಆಯ್ಕೆ ಮಾಡಿರುವ ವದಂತಿ ಇದೆ; ಹಾಗೂ ಗುಮಾಸ್ತರ ಹುದ್ದೆಗಳಿಗೆ ಮೀಸಲು ಹುದ್ದೆಗಳನ್ನೇ ಇಡಲಿಲ್ಲ ಎಂದು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಶಾಖೆ ಆಪಾದಿಸಿದೆ. ಹೀಗೆ ಪರಿಶಿಷ್ಟ ಜನಾಂಗದ ಸಂವಿಧಾನಾತ್ಮಕ ಹಕ್ಕುಗಳ ಉಲ್ಲಂಘನೆಯನ್ನು ನ. ೩೦ರೊಳಗೆ ಸರಿಪಡಿಸದಿದ್ದಲ್ಲಿ ನ್ಯಾಯಕ್ಕಾಗಿ ಹಂತಹಂತವಾಗಿ ತೀವ್ರ ಹೋರಾಟ ನಡೆಸಲಾಗುವುದೆಂದು ಅದು ಎಚ್ಚರಿಸಿದೆ.

---

ಈಚೆಗೆ ಕೆಲವು ದಿನಗಳಿಂದ ನೋವಿಯಲ್ಲಿ ಕನ್ನಡಿಗರ ಮೇಲೆ ವ್ಯಾಪಕ ಹಿಂಸೆ ನಡೆಯುತ್ತಿರುವುದನ್ನು ರಾಜ್ಯಾದ್ಯಂತ ಕನ್ನಡಿಗರು ಪ್ರತಿಭಟಿಸಿದ್ದು, ನ.ರಾ.ಪುರ, ಕೊಪ್ಪ ಕಾಲೇಜುಗಳ ವಿದ್ಯಾರ್ಥಿಗಳೂ ಪ್ರತಿಭಟನಾ ಮೆರವಣಿಗೆ ನಡೆಸಿದರು.

# ನ.ರಾ.ಪುರದ ಪ್ರಕರಣ: ಹಲವು ಅಭಿಪ್ರಾಯಗಳು

**ನ.ರಾ.ಪುರದ ಪೋಲೀಸ್ ಠಾಣೆಯಲ್ಲಿ ನ. ೨ರಂದು ನಡೆದ ಪ್ರಕರಣದ ಬಗ್ಗೆ ನವೆಂ. ೭-೧೧ ರ ವರದಿಯ ಬಗ್ಗೆ ಅಲ್ಲಿನ ಕೆಲವರು ಅಸಮಾಧಾನ ವ್ಯಕ್ತಪಡಿಸಿದರು. 'ವರದಿ ನಿಷ್ಪಕ್ಷಪಾತವಾಗಿ ಇರಬೇಕು' ಎಂದರು. ಕೆಲವರು ಪತ್ರಿಕೆ ಎಂದರೆ ಹೇಗಿರಬೇಕು ಎಂದೆಲ್ಲ ಹಿತವಚನ ಹೇಳಿದರು.**

**ಆ ದಿನ ಏನು ನಡೆಯಿತೆಂಬುದಕ್ಕೆ ನಾವು ಪ್ರತ್ಯಕ್ಷದರ್ಶಿಗಳಲ್ಲ. ಆದರೆ ಕೆಲವು ಪ್ರತ್ಯಕ್ಷದರ್ಶಿಗಳು, ಮತ್ತು ಕೆಲವು ಗಣ್ಯರು, ಜನಸಾಮಾನ್ಯರು, ಪೋಲೀಸರು ಅಲ್ಲದೆ ಸ್ವತಃ ಡಾ॥ ನಾಗರಾಜರನ್ನೂ ಕೂಡ ಭೇಟಿಯಾಗಿ ಅವರವರ ಅಭಿಪ್ರಾಯ ಮತ್ತು ಹೇಳಿಕೆಗಳನ್ನು ಸಂಗ್ರಹಿಸಿ ಇಲ್ಲಿ ವರದಿ ಮಾಡಿದ್ದೇವೆ ಮತ್ತು ಸ್ವಲ್ಪ ವಿಶ್ಲೇಷಣೆ ಮಾಡಿದ್ದೇವೆ. ಇನ್ನೂ ಒಂದೆರಡು ಅಭಿಪ್ರಾಯಗಳು ಉಳಿದು ಹೋಗಿರಬಹುದು. ಆದರೆ ಪ್ರಮುಖವಾದ ಎಲ್ಲ ಅಂಶಗಳನ್ನೂ ಸಂಗ್ರಹಿಸಿದ್ದೇವೆನ್ನುವ ಭರವಸೆಯಿದೆ.**

**ಈಗಲೂ ಈ ವರದಿ ಮತ್ತು ವಿಶ್ಲೇಷಣೆ ಎಲ್ಲರಿಗೂ ಸಮಾಧಾನ ಕೊಡಲಿಕ್ಕಿಲ್ಲ ಎಂಬುದು ಗೊತ್ತಿದೆ. ಆದರೆ ಅದು ಅನಿವಾರ್ಯ. —ಸಂಪಾದಕ.**

**ಡಾ॥ ನಾಗರಾಜ್ ಹೇಳಿಕೆ**

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

ಅದಾಗಿ ಸ್ವಲ್ಪ ಹೊತ್ತಿನ ನಂತರ ಚಿಕ್ಕಮಗಳೂರು ಡಿವೈಎಸ್ಪಿ ಬಂದರು. ಲಾಕಪ್ಪಿನಿಂದ ತನ್ನನ್ನು ಹೊರಕ್ಕೆ ಕರೆಸಿ ತನ್ನ ದೂರನ್ನು ಕೇಳಿಕೊಂಡರು. ತಾನು ಬರೆದು ಕೊಡುತ್ತೇನೆಂದರೆ ಯಾರೂ ಸಹಾಯ ಮಾಡಲಿಲ್ಲ.ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಬಂದ ಎಸ್ಪಿ ಯವರು ತನ್ನನ್ನು ಚೇಂಬರಿಗೆ ಕರೆಸಿ, ಕೂರಿಸಿಕೊಂಡು ಸಾವಧಾನವಾಗಿ ತನ್ನ ದೂರನ್ನು ಕೇಳಿ, ಇಬ್ಬರೂ ಸ.ಇ.ಗಳು ಮತ್ತು ಪಿ.ಸಿ.ಗಳೊಂದಿಗೆ ನ್ಯಾಯಾಧೀಶರ ಮನೆಗೆ ಕಳಿಸಿಕೊಟ್ಟರು. ಎಸ್ಪಿ, ಡಿವೈಎಸ್ಪಿಗಳ ಹಾಜರಿಯಲ್ಲಿ ತಮಗೆ ಪೋಲೀಸರಿಂದ ಮತ್ಯಾವ ಹಿಂಸೆಯೂ ನಡೆಯಲಿಲ್ಲ.

ತನ್ನ ಹೇಳಿಕೆ ಪಡೆದ ನ್ಯಾಯಾಧೀಶರು, ವೈದ್ಯಕೀಯ ಚಿಕಿತ್ಸೆಯ ಮನವಿಯನ್ನು ಕೇಳಿ, 'ಚಿಕಿತ್ಸೆ ಕೊಡಿಸುವಂತೆ ಹಾಗೂ ಅಗತ್ಯ ಬಿದ್ದರೆ ಆಸ್ಪತ್ರೆಗೆ ಸೇರಿಸಿಕೊಳ್ಳುವಂತೆ ಬರೆದಿದ್ದೇನೆ' ಎಂದು ಹೇಳಿ ಪೋಲೀಸರೊಂದಿಗೆ ಕಳಿಸಿಕೊಟ್ಟರು.

ಆದರೆ ಪೋಲೀಸರು ತನ್ನನ್ನು ವೈದ್ಯರಲ್ಲಿಗೆ ಕರೆದುಕೊಂಡು ಹೋಗದೆ ಠಾಣೆಗೆ ಕರೆತಂದರು. ಎಸ್ಪಿ, ಡಿವೈಎಸ್ಪಿ ಹೊರಟು ಹೋಗಿದ್ದರು. ಪಬ್ಲಿಕ್ ಪ್ರಾಸಿಕ್ಯೂಟರ್ ಬಂದು ತನ್ನ ಸ್ಥಿತಿ ನೋಡಿ ಆಸ್ಪತ್ರೆಗೆ ಸೇರಿಸಲು ಹೇಳಿದರೂ ಆದಿನ ರಾತ್ರಿ (ನ.೨) ಸಬ್ ಜೈಲಿನಲ್ಲಿಯೇ ಇಟ್ಟು ನ.೩ರಂದು ಮಧ್ಯಾಹ್ನದ ಹೊತ್ತಿಗೆ ಜೈಲ್ ಸೂಪರಿಂಟೆಂಡೆಂಟರ ಹತ್ತಿರ ಕರೆದೊಯ್ದರು. ಅವರು, 'ನ್ಯಾಯಾಧೀಶರು ನಿಮ್ಮ ಮೇಲಿನ ಎಲ್ಲಾ ಕೇಸುಗಳನ್ನೂ ವಜಾಮಾಡಿ ಈ ಕೂಡಲೇ ನಿಮ್ಮನ್ನು ಬಿಡುಗಡೆ ಮಾಡಲು ಆಜ್ಞೆ ಮಾಡಿದ್ದಾರೆ' ಎಂದರು. ನಂತರ ಪೋಲೀಸರು ತನ್ನನ್ನು ಕೋರ್ಟ್ ಆವರಣದಲ್ಲಿ ಕಾದು ನಿಂತಿದ್ದ ಸಾರ್ವಜನಿಕರಿಗೆ ಒಪ್ಪಿಸಿದರು. ಹೊರಗೆ ಕಾಯುತ್ತಿದ್ದ ಕಾರಿನಲ್ಲಿ ಹೋಗಿ ಕುಳಿತು, ನ.ರಾ.ಪುರ ವೈದ್ಯರ ಸಲಹೆ ಮೇರೆಗೆ ಎಕ್ಸ್‌ರೇ ಹಾಗೂ ತುರ್ತು ಚಿಕಿತ್ಸೆಗಾಗಿ ಶಿವಮೊಗ್ಗದ ಮೆಗ್ಗಾನ್ ಆಸ್ಪತ್ರೆಯ ತುರ್ತು ಚಿಕಿತ್ಸೆ ವಾರ್ಡಿಗೆ ಸೇರಿ ಚಿಕಿತ್ಸೆ ಪಡೆಯುತ್ತಿದ್ದೇನೆ—ಎಂದು ಹೇಳಿರುವ ಡಾ॥ ನಾಗರಾಜ್, "ನಿರಪರಾಧಿಯಾಗಿ ನಾನು ಅನುಭವಿಸಿದ ಪೋಲೀಸ್ ದೌರ್ಜನ್ಯದಿಂದಾಗಿ ನನಗೆ ಧನಹಾನಿ, ಮಾನಹಾನಿ ಆಗಿರುವುದಲ್ಲದೆ ಆರೋಗ್ಯ ಕೆಟ್ಟು, ಮನೋವ್ಯಥೆಯಿಂದಾಗಿ ತುರ್ತು ಚಿಕಿತ್ಸೆಗೆ ಒಳಗಾಗಿದ್ದೇನೆ. ನನಗಾಗಿರುವ ಅನ್ಯಾಯಕ್ಕೆ ತಕ್ಕ ಪರಿಹಾರ ಸಿಕ್ಕಿ, ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು" ಎಂದಿದ್ದಾರೆ.

ಅವರು ನಾಲ್ಕು ಪುಟಗಳ ಸೈಕ್ಲೋಸ್ಟೈಲ್ ಮಾಡಿದ ಹಸ್ತ ಪ್ರತಿಯೊಂದನ್ನು ಶಿವಮೊಗ್ಗ ಹಾಗೂ ನ.ರಾ.ಪುರದಲ್ಲಿ ಸಾರ್ವಜನಿಕರ ಮತ್ತು ಪತ್ರಕರ್ತರ ತಿಳುವಳಿಕೆಗಾಗಿ ಹೊರಡಿಸಿದಾರೆ.

ಮೊಣಕಾಲಿನಲ್ಲಿ ವಿಪರೀತ ರಕ್ತಸ್ರಾವವಾಗಿ ಕಾಲು ಮಡಿಚಲು–ಬಿಡಿಸಲು ತೊಂದರೆಯಾಗಿದೆ; ಸೊಂಟದ ಮೂಳೆ ಮುರಿದಿದೆ; ಹಾಗೂ ನೆತ್ತಿಯ ಮೇಲೆ ಆಳವಾದ ಗಾಯವಾಗಿ ವಿಪರೀತ ರಕ್ತ ಸ್ರಾವವಾಗಿದೆ.... ಒಟ್ಟನಲ್ಲಿ, ಗಟ್ಟಿಮುಟ್ಟಾಗಿದ್ದುದರಿಂದ ಬದುಕಿದ್ದೇನೆ. ಇನ್ಯಾರಾದರೂ ಆದರೆ ಸಾಯಲಿಕ್ಕೆ ಸಾಕಾಗುವಷ್ಟು ಪೆಟ್ಟಾಗಿದೆ – ಎನ್ನುವ ನಾಗರಾಜ್, ತನ್ನ ವೃಷಣದ ಮೇಲೆ ಒದ್ದು ಸಾಯಿಸುತ್ತೇನೆನ್ನುತ್ತಾ ಲಕ್ಷ್ಮಣ್ ಅನೇಕ ಸಾರಿ ಒದ್ದುದನ್ನು ತಾವು ತಪ್ಪಿಸಿಕೊಂಡುದಾಗಿ ಹೇಳಿದ್ದಾರೆ. ಇದು ಹಾಗೂ ಲಕ್ಷ್ಮಣ್ ಪಿಸ್ತೂಲು ತೆಗೆಯ ಹೋದುದನ್ನು ಅವರು ಕೊಲೆ ಯತ್ನ ಎಂದು ನ್ಯಾಯಾಲಯಕ್ಕೆ ಕೊಟ್ಟ ದೂರಿನಲ್ಲಿ ವರ್ಣಿಸಿದ್ದಾರೆ.

ಅವರ ದೂರಿನ ಬಗ್ಗೆ ತರೀಕೆರೆ ಡಿವೈಎಸ್ಪಿ ತನಿಖೆ ನಡೆಸುತ್ತಾರೆ. ಆಪಾದನೆಗಳಲ್ಲಿ ಸತ್ಯಾಂಶವಿದೆಯೆಂದು ಅವರು ವರದಿ ಮಾಡಿದರೆ ಪ್ರಕರಣ ಪ್ರಾಸಿಕ್ಯೂಶನ್ನಿನ ವಶಕ್ಕೆ ಬಂದು, ಸ.ಇ.ಗಳ ಮೇಲೆ ಮೊಕದ್ದಮೆ ಹೂಡಲಾಗುತ್ತದೆ. ಸತ್ಯಾಂಶವಿಲ್ಲವೆಂದು ವರದಿ ಬಂದರೆ ದೂರು ಕೊಟ್ಟವರೇ ಮೊಕದ್ದಮೆ ಮುಂದುವರಿಸಿ ಆಪಾದನೆ ಸಾಬೀತು ಮಾಡಬೇಕಾಗುತ್ತದೆ.

**ಈಗ ಊರಿನ ಹಲವು ಗಣ್ಯರು, ಸಾಮಾನ್ಯರು, ಪೋಲೀಸರು, ಮುಡಬೂರಿನ ಕೆಲವು ಜನ ನಾಗರಾಜರ ಸಂಬಂಧಿಗಳು ಏನು ಹೇಳುತ್ತಾರೆ ನೋಡೋಣ.**

**ಠಾಣಾಧಿಕಾರಿ ಆರ್. ಲಕ್ಷ್ಮಣ್**

ಡಾ॥ ನಾಗರಾಜರ ಹೇಳಿಕೆಯನ್ನು ಕೇಳಿದನಂತರ ನ.ರಾ.ಪುರ ಠಾಣಾಧಿಕಾರಿ ಆರ್.ಲಕ್ಷ್ಮಣ್ ಅವರನ್ನು ಭೇಟಿಮಾಡಿದಾಗ ಅವರು ಹೇಳಿದ್ದರ ಸಾರಾಂಶ ಹೀಗಿದೆ:

ಅಕ್ಟೋಬರ್ ೩೧ರ ರಾತ್ರಿ ಪ್ರಕಾಶ ಎಂಬ ಸುಮಾರು ೧೮ ವರ್ಷದ ಹುಡುಗ ಬಂದು ತನ್ನ ಮೇಲೆ ಸುಂದರೇಶ, ಸಾಧು ಪೂಜಾರಿ ಹಲ್ಲೆ ನಡೆಸಿದ್ದಾಗಿ ದೂರು ಹೇಳಿದ. ದೂರು ದಾಖಲು ಮಾಡಿಕೊಂಡು, ಆಸ್ಪತ್ರೆಗೆ ಕಳಿಸಿ ಕೈಕಾಲು ತರಚಿದ್ದಕ್ಕೆ ವೈದ್ಯರ ಸರ್ಟಿಫಿಕೇಟ್ ಮಾಡಿಸಿ, ಕಳಿಸಿದೆ. ಅರ್ಧ ಗಂಟೆಯಲ್ಲಿ ಪುನಃ ಬಂದು, 'ಐದು ಜನರನ್ನೂ ಸೇರಿಸಿ ದೂರು ಕೊಡು ಎಂದು ಡಾ| ನಾಗರಾಜ್ ಹೇಳುತ್ತಿದ್ದಾರೆ' ಎಂದ. ಅದನ್ನೂ ದಾಖಲು ಮಾಡಿದೆ. ಪುನಃ ಅರ್ಧ ಗಂಟೆಯಲ್ಲಿ ದೂರನ್ನು ಬರೆಸಿಕೊಂಡೇ ತಂದ. ಅದನ್ನೂ ಫೈಲ್ ಮಾಡಿದೆ. ಮರುದಿನ ಬೆಳಿಗ್ಗೆ ಸ್ಥಳ ಮಹಜರಿಗೆ ಹೋದೆ, ದೂರಿನಲ್ಲಿ ಕಂಡ ಯಾರೂ ಸಿಗಲಿಲ್ಲ. ಡಾ॥ ನಾಗರಾಜರೂ ಇರಲಿಲ್ಲ. ಬಂದೊಡನೆ ಅವರನ್ನೆಲ್ಲ ಸ್ಟೇಶನ್ನಿಗೆ ಬರಲು ಹೇಳುವಂತೆ ಊರವರಿಗೆ ತಿಳಿಸಿ ಬಂದೆ.

೨ನೇ ತಾ॥ಸುಂದರೇಶ, ಸಾಧುಪೂಜಾರಿ ಬಂದರು. ವಿಚಾರಣೆ ನಡೆಸಿದಾಗ ಪ್ರಕಾಶನನ್ನು ಕೇಸಕ್ಕಿ ಮಂಜಪ್ಪಗೌಡರ ತೋಟದ ಹತ್ತಿರ ತಡೆದು, 'ಹತ್ತಿರದ ಸಂಬಂಧಿಯೇ ಆದರೂ ಯಾಕೋ ಹೀಗೆಲ್ಲ ತರಲೆ ಮಾಡ್ತಿ?' ಎಂದು ವಿಚಾರಿಸಿದ್ದು ನಿಜವೆಂದೂ ಹಲ್ಲೆ ಮಾಡಲಿಲ್ಲವೆಂದೂ ಹೇಳಿದರು. ಅವರನ್ನು ಬಂಧಿಸಿದೆ. ಡಾ| ನಾಗರಾಜ್ ಮತ್ತು ಪದ್ಮಾಕರ್ ತಾ॥ ಕಚೇರಿಯಿಂದ ನೋಡುತ್ತಾ ನಿಂತಿದ್ದರು. ಕರೆಸಿ, ಕುರ್ಚಿಕೊಟ್ಟು ಕೂರಿಸಿ, ಏನು ನಡೆಯಿತೆಂದು ವಿಚಾರಿಸಿದೆ. ಏನು ನಡೆಯಿತೆಂದು ಹೇಳುವ ಬದಲು, 'ಐದು ಜನರ ಮೇಲೆ ದೂರು ಕೊಟ್ಟರೆ ಯಾಕೋ ಇಬ್ಬರ ಮೇಲೆ ಕ್ರಮ ತೆಗೆದುಕೊಂಡಿದ್ದಿ?' ಎಂದರು.

'ಇದು ಪೋಲೀಸ್ ಠಾಣೆ. ನಾಲಿಗೆ ಸ್ವಲ್ಪ ಬಿಗಿ ಹಿಡಿದು ಮಾತಾಡಬೇಕು. ಹೀಗೆ ಬ್ರೂಟ್ ಥರ ಮಾತಾಡಬಾರದು' ಎಂದೆ. ತಕ್ಷಣ ಕುರ್ಚಿಯಿಂದ ಎದ್ದವರೇ, 'ನಿನ್ನ ರಕ್ತ ಕುಡಿಯುತ್ತೀನಿ. ನೀನು ಹ್ಯಾಗೆ ಪೋಲೀಸ್ ಆಗಿರ್ತಿ ನೋಡ್ತೀನಿ....' ಮುಂತಾಗಿ ಬಾಯಿಗೆ ಬಂದ ಹಾಗೆ ಕೂಗುತ್ತ, ಹತ್ತಿರದಲ್ಲಿದ್ದ ಕುಡಿವ ನೀರಿನ ಬಾಟಲನ್ನು ಕುಟ್ಟಿ ಮುರಿದು, ನನಗೆ ಇರಿಯಲು ನುಗ್ಗಿದರು. ನಾನು ಆತ್ಮ ರಕ್ಷಣೆಗಾಗಿ ಪಿಸ್ತೂಲಿಗೆ ಕೈಹಾಕಿದೆ. ಅಷ್ಟರಲ್ಲಿ ಪಿ.ಸಿ.ಗಳು ಬಂದು ಅವರನ್ನು ಹಿಡಿದರು. ನಾಗರಾಜರನ್ನು ಅರೆಸ್ಟ್ ಮಾಡಿ ಪ್ರಕರಣ ದಾಖಲು ಮಾಡಿದೆ. ಲಾಕಪ್ಪಿಗೆ ಹಾಕಲು ಹೇಳಿದೆ. ಆದರೆ ನಾಗರಾಜ್ ಇಬ್ಬರು ಪೋಲಿಸರನ್ನು ತಳ್ಳಿ ತಪ್ಪಿಸಿಕೊಳ್ಳಲು ಯತ್ನಿಸುತ್ತ ಮೆಟ್ಟಿಲ ಮೇಲೆ ಬಿದ್ದರು. ಹಣೆಯ ಮೇಲ್ಭಾಗ ಗಾಯವಾಗಿ ರಕ್ತ ಬಂತು. ಅಂತೂ ಲಾಕಪ್ಪಿಗೆ ಹಾಕಿದ್ದಾಯಿತು.

ಅಷ್ಟರಲ್ಲಿ ಸರ್ಕಲ್ ಇನ್‌ಸ್ಪೆಕ್ಟರು ಮತ್ತು ಸ.ಇ.ನಾರಾಯಣಸ್ವಾಮಿ ಬಂದರು. ನಾರಾಯಣ ಸ್ವಾಮಿ ಹೋಗಿ ನಾಗರಾಜರನ್ನು ಲಾಕಪ್ಪಿನಿಂದ ಕರೆತಂದು ಬಟ್ಟೆಯಿಂದ ರಕ್ತ ಒರೆಸಿ, ಲಿಂಬೆ ರಸ ಕುಡಿಯಲು ಕೊಟ್ಟು ಕೂಡಿಸಿಕೊಂಡು, 'ಇಷ್ಟೆಲ್ಲ ವಿದ್ಯಾವಂತರಾದ ನೀವುಗಳೇ ಹೀಗೆ ಮಾಡಿದರೆ ಹೇಗೆ? ...' ಮುಂತಾಗಿ ಹೇಳುತ್ತಿದ್ದಂತೆ ನಾಗರಾಜ್ ಎದ್ದು ಓಡಿದರು. ನ್ಯಾಯಾಧೀಶರ ಮನೆಯ ಪಕ್ಕದ ಸಹಾಯಕ ಇಂಜಿನಿಯರ್‌ರ ಮನೆಗೆ ನುಗ್ಗಿ ಕೋಣೆಯೊಂದರಲ್ಲಿ ಬಾಗಿಲು ಹಾಕಿಕೊಂಡರು. ಅಲ್ಲಿಂದ ಪುನಃ ಅವರನ್ನು ಹೊರಗೆ ತರುವಾಗ ಉರುಳಾಡಿ ತಲೆಯನ್ನು ಗೋಡೆಗೆ ಡಿಕ್ಕಿ ಹೊಡೆ

೩ನೇ ಪುಟಕ್ಕೆ

## ಸಂಪಾದಕರ ಮೇಲೆ ಕೈಮಾಡುವ ಯತ್ನ

ನ.ರಾ.ಪುರ: ಇಲ್ಲಿನ ಪೋಲೀಸ್ ಠಾಣೆಯಲ್ಲಿ ನ. ೨ರಂದು ನಡೆದ ಘಟನೆಯ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಲು ನ. ೧೨ರಂದು 'ಮುಂಜಾವು' ಸಂಪಾದಕರು ಬಂದಿದಾಗ ಕೆಲವರು ಅವರಿಗೆ ಬೆದರಿಕೆ ಹಾಕಿ ಅವರಮೇಲೆ ಕೈಮಾಡಲು ಯತ್ನಿಸಿದರು.

ನ್ಯಾಯಾಲಯದೆದುರು ಆಂಬುಲೆನ್ಸ್‌ನಲ್ಲಿ ಮಲಗಿದ್ದ ಡಾ| ನಾಗರಾಜರ ಹೇಳಿಕೆ ಪಡೆಯುವಾಗಲೂ ಬೆದರಿಸುವ ದನಿಯಲ್ಲಿ ಮನಸ್ಸಿಗೆ ಬಂದಂತೆ ಮಾತಾಡುತ್ತ, ಕೆಲಸಕ್ಕೆ ಅಡ್ಡಿಮಾಡುತ್ತಾ ಸುತ್ತುಗಟ್ಟಿದ್ದ ಕೆಲವರು, ಸಂಪಾದಕರು ವ್ಯಾನಿನಿಂದ ಇಳಿಯುತ್ತಿದ್ದಂತೆಯೇ "ಮೈಸೂರು ಬ್ಯಾಂಕ್ ಮ್ಯಾನೇಜರ್ ನಿಮ್ಮನ್ನು ಅರ್ಜೆಂಟ್ ಕರೆಯುತ್ತಿದ್ದಾರೆ" ಎಂದು ಬಲವಂತಮಾಡಿದರು. ಅಷ್ಟರಲ್ಲಿ ಡಾಕ್ಟರನ್ನು ನ್ಯಾಯಾಲಯದ ಆವರಣದೊಳಕ್ಕೆ ಒಯ್ದಿದ್ದರಿಂದ "ಅಲ್ಲೇನು ನಡೆಯುತ್ತದೆ, ವರದಿ ತೆಗೆದುಕೊಂಡು ಬರುತ್ತೇನೆ"ಂದರೂ ಬಿಡದೆ ಬ್ಯಾಂಕಿನ ಒಬ್ಬ ೪ನೇ ದರ್ಜೆ ನೌಕರ ಮತ್ತು ಇತರ ಕೆಲವರು ಹೆಚ್ಚೂಕಮ್ಮಿ ಎಳೆಯುತ್ತ—ತಳ್ಳುತ್ತ ಬ್ಯಾಂಕಿಗೆ ಕರೆದುಕೊಂಡು ಹೋದರು. ಅಲ್ಲಿ ಗುಂಪು ಕೂಡಿದ್ದವರು ಪುನಃ ಬೆದರಿಸುವ ರೀತಿ ವಾಗ್ವಾದಕ್ಕೆ ತೊಡಗಿದರು. (ಅನಂತರ ಮ್ಯಾನೇಜರ್‌ಗೆ ಫೋನ್ ಮಾಡಿ ಕರೆದರು ಅಂದರೆ ಮೊದಲು ಸುಳ್ಳು ಹೇಳಿದ್ದರು.)

ಮ್ಯಾನೇಜರ್ ಚೇಂಬರಿನಲ್ಲಿ ಅವರ ಹತ್ತಿರವೂ ಮಾತಾಡಲು ಬಿಡದೆ ತಲೆಗೊಂದು ಮಾತಾಡುತ್ತಿದ್ದಾಗ ಸಂಪಾದಕರು ಮ್ಯಾನೇಜರಿಗೆ, "ನಾನು ಯಾರ ಹತ್ತಿರ ಮಾತಾಡಬೇಕು—ನಿಮ್ಮ ಹತ್ತಿರವಾ ಅವರ ಹತ್ತಿರವಾ?" ಎಂದಾಗ ಅವರು ಎಲ್ಲರನ್ನೂ ಸುಮ್ಮನಾಗಿಸಿದರು.

೭-೧೧-೮೨ ರ 'ಮುಂಜಾವು'ನಲ್ಲಿದ್ದ ಡಾ॥ ನಾಗರಾಜ್ ಕುರಿತ ಸುದ್ದಿಯಿಂದ ಕೋಪಗೊಂಡ ಕೆಲವರು ಅದೇ ಸಂಚಿಕೆಯಲ್ಲಿನ 'ಓದುಗರ ಪತ್ರ'ದ ಬಗ್ಗೆ ಬ್ಯಾಂಕಿನ ಕಾವಲುಗಾರ ಮತ್ತಿತರ ಸಿಬ್ಬಂದಿಯನ್ನು ಕೆರಳಿಸಿದ್ದು ಸ್ಪಷ್ಟವಾಗುತ್ತಿತ್ತು. (ಪತ್ರದ ಬಗ್ಗೆ ಮ್ಯಾನೇಜರ ಸ್ಪಷ್ಟೀಕರಣ ೪ನೇ ಪುಟದಲ್ಲಿ)

## ಓದುಗರ ಪತ್ರಗಳು

# ಕನ್ನಡಿಗರ ಇಂಗ್ಲಿಷ್ ವ್ಯಾಮೋಹದ ಅಧ್ವಾನ

ಸ್ವಾಮಿ,

ಆಡಳಿತ ಮುಂತಾದ ಎಲ್ಲ ರಂಗಗಳಲ್ಲಿ ಕನ್ನಡ ಬಳಕೆಗೆ ಬರಬೇಕೆಂಬ ಒತ್ತಾಯದ ಬಿಸಿ ಆರತೊಡಗಿದೆಯೇನೋ ಎನ್ನಿಸುವಾಗ, ಕನ್ನಡಿಗರ ಹೊಲಸು ಇಂಗ್ಲಿಷ್ ವ್ಯಾಮೋಹದ ಬಗ್ಗೆ ಇಲ್ಲೊಂದು ಘಟನೆ ನೋಡಿ:

ಈಚೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ನಿವೇಶನಗಳಿಗೆ ಅರ್ಜಿ ಕರೆದಿದ್ದಾಗ, ಒಂದೆ ಅರ್ಜಿ ಸಲ್ಲಿಸಿದವರು ಖಾಲಿ ಕಾಗದದಲ್ಲಿ ಸಲ್ಲಿಸಬಹುದು ಎಂದು ಪ್ರಕಟಿಸಿತ್ತು. ನನ್ನ ಮಗ ಮತ್ತು ಅಳಿಯನ ಅರ್ಜಿಗಳನ್ನು ತೆಗೆದುಕೊಂಡು ನಾನು ನ. ೨ರಂದು ಹೋಗಿದ್ದೆ. ಒಂದುಗಂಟೆ ಕಾದನಂತರ ಅರ್ಜಿ ತೆಗೆದುಕೊಳ್ಳುವ ಗುಮಾಸ್ತರು ಬಂದರು. ನನ್ನ ಅರ್ಜಿ ಪಡೆದು ಒಂದು ಕಾಗದದ ತುಂಡಿನ ಮೇಲೆ ಪಾವತಿ ಬರೆದು ಕೊಟ್ಟರು. ಮನೆಗೆ ತಂದು ಅದನ್ನು ಸರಿಯಾಗಿ ಓದಿ ನೋಡಿದರೆ ನಾನು ಕೊಟ್ಟ ಅರ್ಜಿಗಳು ಕೇವಲ ಬಿಳಿ ಕಾಗದಗಳಾಗಿ ಮಾರ್ಪಾಡಾಗಿಬಿಟ್ಟಿದ್ದವು! ಅಂದರೆ—ಆ ಗುಮಾಸ್ತರು ಕನ್ನಡದಲ್ಲಿ ಬರೆಯುವುದು ತಮ್ಮ ದರ್ಜೆಗೆ ಕುಂದು ಎಂದೋ ಏನೋ ಇಂಗ್ಲಿಷಿನಲ್ಲಿ "ರಿಸೀವ್ಡ್ ಟೂ ಪ್ಲೇಯ್ನ್ ಪೇಪರ್ಸ್ ಫಾರ್ ಅಪ್ಲಿಕೇಶನ್" (ಅರ್ಜಿಗಾಗಿ ಎರಡು ಖಾಲಿ ಕಾಗದಗಳನ್ನು ಪಡೆದಿದೆ.) ಎಂದು ಬರೆದಿದ್ದರು!

ಆಡಳಿತಗಾರರು ಇಂಗ್ಲಿಷ್ ವ್ಯಾಮೋಹಕ್ಕೆ ಸಿಕ್ಕಿ ಹೀಗೆ ಅಧ್ವಾನ ಪಡುವುದು ಬಿಟ್ಟು **ಲಕ್ಷಣವಾಗಿ ಕನ್ನಡ ಬಳಸಿದರೆ** ಕಚೇರಿಗಳ ಕೀರ್ತಿ ಕಳಶಗಳೇನಾದರೂ ಕಳಚಿ ಬೀಳುತ್ತವೆಯೆ? ಈ ಅಸಂಬದ್ಧಗಳು ಸರಿಹೋಗುವುದಾದರೂ ಯಾವತ್ತು?

—ಹರಿಹರಪುರ **ಬಿ. ಸುಬ್ರಮಣ್ಯಂ,**
ಬೆಂಗಳೂರು.

## ಕೃಷಿ ಸಹಾಯಕರು ಸುಧಾರಿತ ಕೃಷಿ ಪ್ರಚಾರಕ್ಕೆ ಮಾತ್ರವೆ?

ಮಾನ್ಯರೆ,

ಕೆಲವು ಮಂದಿ ಕೃಷಿ ಸಹಾಯಕರು (ನಮ್ಮ ಶಾನೊಳ್ಳಿಯವರಲ್ಲ) ತಾವು ಕೇವಲ ಸುಧಾರಿತ ಬೇಸಾಯ ಕಾರ್ಯಕ್ರಮದ ಪ್ರಚಾರಕ್ಕಾಗಿ ಮಾತ್ರ ನಿಯೋಜಿತರೆಂದು ಭಾವಿಸಿದಂತಿದೆ. ಇದು ನಿಜವೆ? ಸಾಮಾನ್ಯ ರೈತರಿಗೆ ಇವರು ಸಮಯದಲ್ಲಿ ನೆರವು, ಸಹಕಾರ ನೀಡಬೇಕಾದ್ದು ಇವರ ಕರ್ತವ್ಯದಲ್ಲಿ ಸೇರಿಲ್ಲವೆ? ಸಂಬಂಧಪಟ್ಟ ಇಲಾಖೆಯವರು (ಇದ್ದರೆ) ಈ ಬಗ್ಗೆ ಸಮಾಧಾನ ನೀಡಲಿ.

**—ಕೆ. ಸಿ. ಲಕ್ಷ್ಮೀನಾರಾಯಣಪ್ಪ,**
ಕಾವಳಿ.

## "ವೈಮನಸ್ಯವಿಲ್ಲ"

ಮಾನ್ಯರೆ,

ತಮ್ಮ ೩೦-೧೦-೮೨ರ ಸಂಚಿಕೆಯಲ್ಲಿ, ಹಳೇಮಠ ವೆಂಕಟೇಗೌಡರಿಂದ ನನ್ನ ಮೇಲೆ ಹಲ್ಲೆ ಸಂಬಂಧ ಠಾಣೆಗೆ ದೂರು ಕೊಟ್ಟಿರುವುದಾಗಿ ಪ್ರಕಟವಾಗಿದೆ.

ಆದರೆ ಸದರಿ ವೆಂಕಟೇಗೌಡರು ಮತ್ತು ನಾವುಗಳು ಊರವರ ಸಹಕಾರದಿಂದ ಅನ್ಯೋನ್ಯವಾಗಿ, ಪರಸ್ಪರ ಹೊಂದಾಣಿಕೆಯಿಂದ ಇದ್ದೇವೆ. ನಮ್ಮೊಳಗೆ ಯಾವುದೇ ರೀತಿ ವೈಮನಸ್ಯ ಇರುವುದಿಲ್ಲ ಎಂದು ತಿಳಿಸಲು ಇಚ್ಛಿಸುತ್ತೇನೆ.

**—ಹೆಚ್. ವಿ. ಗಣೇಶ.**
ಹಳೇಮಠ, ಹೊಸಕೊಪ್ಪ ಅಂಚೆ.

# ನರಸಿಂಹರಾಜಪುರದ ಪ್ರಕರಣ

(೨ನೇ ಪುಟದಿಂದ)

ಸಿಕೊಂಡರು. ನಡೆದು ಬರಲು ಬಗ್ಗಲಿಲ್ಲವಾದ್ದರಿಂದ ಪಿ.ಸಿ.ಗಳ ಕೈಲಿ ಹೊರಿಸಿ ತರಬೇಕಾಯಿತು.

ಈಗ ಅವರನ್ನು ಆಸ್ಪತ್ರೆಗೆ ಒಯ್ಯಬೇಕಾಗಿತ್ತು. ಪುನಃ ಓಡಿ ಹೋಗುವ ಅಪಾಯವಿದ್ದುದರಿಂದ ಬೇಡಿ ಹಾಕಲಾಯಿತು. ನಡೆಯಲು ಸಾಧ್ಯವೇ ಇಲ್ಲವೆಂದು ನಟಿಸಿದರು. ಟ್ಯಾಕ್ಸಿ ಹುಡುಕಿದೆವು. ಬೇರೆ ಊರಿಗೆ ಹೋಗಿತ್ತು. ಆಟೋರಿಕ್ಷಾದವನು ಊಟಕ್ಕೆ ಹೋಗಿದ್ದ. ನಾಗರಾಜರನ್ನು ಬೇಗ ವೈದ್ಯರಿಗೆ ತೋರಿಸಿ ನ್ಯಾಯಾಧೀಶರ ಮುಂದೆ ಹಾಜರ್ಪಡಿಸಬೇಕಿತ್ತು. ಹಾಗಾಗಿ ಪುನಃ ಹೊತ್ತುಕೊಂಡೇ ಹೋಗಬೇಕಾಯಿತು.

ಆಸ್ಪತ್ರೆಯಲ್ಲಿ ಪರೀಕ್ಷೆ ಮಾಡಿಸಿದಾಗ ತೀವ್ರವಾದ ತೊಂದರೆಯೇನೂ ಇರಲಿಲ್ಲ. ತಲೆಯ ಗಾಯಕ್ಕೆ ಒಂದು ಹೊಲಿಗೆ ಹಾಕಿ ಪಟ್ಟಿ ಹಾಕಿದರು. ಇಂಜೆಕ್ಷನ್ ಕೊಟ್ಟರು. ನಾಗರಾಜ್ ನಡೆಯಲು ಸಾಧ್ಯವೇ ಇಲ್ಲವೆಂದಾಗ ತಹಸೀಲ್ದಾರರ ಜೀಪ್ ತರಿಸಿ ಕೂರಿಸಿಕೊಂಡು ಠಾಣೆಗೆ ತಂದೆವು.

ಅನಂತರ ಡಿವೈಎಸ್ಪಿ, ಎಸ್ಪಿ ಎಲ್ಲ ಬಂದರು. ಹೇಳಿಕೆ ಪಡೆದರು. ನಂತರ (ರಾತ್ರಿ) ನ್ಯಾಯಾಧೀಶರ ಮನೆಯಲ್ಲಿ ನಾಗರಾಜರನ್ನು ಹಾಜರ್ಪಡಿಸಿದಾಗ ಆಸ್ಪತ್ರೆಗೆ ಸೇರಿಸಬೇಕೆಂದು ನಾಗರಾಜ್ ಕೇಳಿಕೊಂಡರು. ಅವರನ್ನು ಉಪ ಬಂದೀಖಾನೆಯ ಲಾಕಪ್ ಆಫೀಸರ್‌ಗೆ ವಹಿಸಿ ಕೊಡುತ್ತ ನ್ಯಾಯಾಧೀಶರು ಅಡ್ಮಿಟ್ ಮಾಡುವ ಅಗತ್ಯ ಕಂಡರೆ ಮಾಡುವಂತೆ ಆದೇಶಿಸಿದ್ದರು. ಆ ದಿನ ಅವರನ್ನು ಲಾಕಪ್ ಆಫೀಸರು ಜೈಲಿನಲ್ಲೇ ಇರಿಸಿದರು.

ಮರುದಿನ ಅವರ ಕಡೆಯವರು ನ್ಯಾಯಾಲಯದಲ್ಲಿ ಜಾಮೀನು ಸಲ್ಲಿಸಿ, ಅವರನ್ನು ಬಿಡಿಸಿಕೊಂಡರು.

ನಾಗರಾಜ್ ಸಾರ್ವಜನಿಕರ ಮುಂದೆ ತುಂಬ ನಟನೆ ಮಾಡಿದರು. ನನ್ನ ಮೇಲೆ ಹಲ್ಲೆಯತ್ನ ನಡೆಸಿದ ಹಾಗೂ ಠಾಣೆಯಿಂದ ಓಡಿಹೋದ ಪ್ರಕರಣಕ್ಕೆ ಪ್ರತಿಯಾಗಿ, ಏನೆಲ್ಲ ಸೃಷ್ಟಿಸಿಕೊಂಡು ದೂರು ನೀಡಿದ್ದಾರೆ. ನನ್ನ ಪ್ರಕರಣವನ್ನು ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್ ತನಿಖೆ ಮಾಡುತ್ತಾರೆ.

ಅವರಿಗೆ ಅವರು ಹೇಳುವಷ್ಟೆಲ್ಲ ಹೊಡೆದಿಲ್ಲ. ನಾನು ಅಂಥ ಪರಿಸ್ಥಿತಿಯಲ್ಲೂ ಸಹನೆ ಕಳೆದುಕೊಳ್ಳಲಿಲ್ಲ. ಸಾಧ್ಯವಾದಷ್ಟು ಹೊತ್ತು ವಿದ್ಯಾವಂತನಿಗೆ ಕೊಡಬೇಕಾದ ಎಲ್ಲ ಮರ್ಯಾದೆ ಕೊಟ್ಟೆವು.

ಒಬ್ಬ ವ್ಯಕ್ತಿ ಅಪರಾಧ ಮಾಡಿರುವುದು ಪೂರ್ವಭಾವಿ ತನಿಖೆಯಿಂದ ಖಾತ್ರಿಯಾದರೆ ಬಾಯಿ ಬಿಡಿಸಲು ನಾನೂ ಹೊಡೆಯುತ್ತೇನೆ. ಅನುಭವಿ ಕಳ್ಳ, ಉದ್ದೇಶಪೂರ್ವಕವಾಗಿ ಅಪರಾಧ ಮಾಡುವವ ಎಂದೂ ಒಳ್ಳೆ ಮಾತಿಗೆ, ಮರ್ಯಾದೆಗೆ ಬಗ್ಗುವವರಲ್ಲ. ನಾಗರಾಜ್‌ಗೂ ಕೊನೆಗೆ ನಾನು ಹೊಡೆಯುತ್ತಿದ್ದೆನೇನೋ. ಆದರೆ ಪ್ರಕರಣ ದಾಖಲೆ, ಎಫ್‌ಐಆರ್ ಬರೆಯುವುದು, ಈ ಎಲ್ಲ ಗಲಾಟೆ—ಇವುಗಳ ನಡುವೆ ಬಿಡುವಾಗಲಿಲ್ಲ.

### ವೈದ್ಯಾಧಿಕಾರಿಗಳು

ನ. ೨ರಂದು ಮಧ್ಯಾಹ್ನ ಪ್ರಾ. ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಯವರು ಮುತ್ತಿನಕೊಪ್ಪಕ್ಕೆ ಹೋಗಿದ್ದುದರಿಂದ ಮಹಿಳಾ ವೈದ್ಯಾಧಿಕಾರಿಗಳು ಡಾ|| ನಾಗರಾಜರನ್ನು ಪರೀಕ್ಷಿಸಿ ಚಿಕಿತ್ಸೆ ಮಾಡಿದರು. ಅವರು ಹೇಳುತ್ತಾರೆ—"ಮೂರು ಗಂಟೆಗೆ ಅವರನ್ನು ಕರೆ ತಂದಾಗ ಪರೀಕ್ಷೆ ಮಾಡಿ, ತಲೆಯಲ್ಲಿ ಆಗಿದ್ದ ಸಣ್ಣ ಗಾಯವೊಂದಕ್ಕೆ ಒಂದು ಹೊಲಿಗೆ ಹಾಕಿದೆ. ಕಾಲು ಗಂಟು ಬಾತಿರಲಿಲ್ಲ. ನೋವು ಎನ್ನುತ್ತಿದ್ದರು. ಇಂಜೆಕ್ಷನ್ನುಗಳನ್ನು ಕೊಟ್ಟೆ. ದೇಹದಲ್ಲಿ ಮತ್ತೆ ಯಾವ ತೊಂದರೆಯೂ ಇರಲಿಲ್ಲ. ನಾಗರಾಜ್‌ರನ್ನು ಕರೆದುಕೊಂಡು ಹೋಗಲು ಪೋಲೀಸರು ಹೊರಟಾಗ ಅವರು ಆಸ್ಪತ್ರೆಗೆ ಸೇರಿಸಿಕೊಳ್ಳಿ ಎಂದು ಕೇಳಿದರು. ಒಪ್ಪಿದೆ. ಆದರೆ ಪೋಲೀಸರು—"ಅವರನ್ನು ಕೂಡಲೇ ನ್ಯಾಯಾಧೀಶರ ಮುಂದೆ ಹಾಜರ್ಪಡಿಸುತ್ತೇವೆ. ಅವರ ಹತ್ತಿರನೇ ಒಪ್ಪಿಗೆ ಪಡೆದು ಸೇರಿಕೊಳ್ಳಲಿ" ಎಂದರು. ಒಪ್ಪಿದೆ. ಯಾವಾಗ ಬಂದರೂ ಸೇರಿಸಿಕೊಳ್ಳುವುದಾಗಿ ಭರವಸೆ ಕೊಟ್ಟೆ."

ವೈದ್ಯಾಧಿಕಾರಿ ಡಾ|| ರಾಜು ನ. ೩ರ ಬೆಳಿಗ್ಗೆ ೯ ಗಂಟೆಗೆ ಉಪ ಬಂದೀಖಾನೆಯಲ್ಲಿ ನಾಗರಾಜರನ್ನು ಪರೀಕ್ಷಿಸಿದರು. ಕಾಲುಗಂಟು ಸ್ವಲ್ಪ ಊದಿತ್ತು. ಸೊಂಟದ ಮೂಳೆ ಮುರಿತವಾಗಲೀ ಇತರ ಯಾವುದೇ ತೀವ್ರ ತೊಂದರೆಯಾಗಲಿ ಕಂಡು ಬರಲಿಲ್ಲ. (ಇದ್ದರೆ ಅವರಿಗೆ ಗೊತ್ತಾಗುತ್ತಿತ್ತು.) ಆದರೆ ನಾಗರಾಜ್ ಮತ್ತು ಅವರ ಕಡೆಯವರು ಮೆಗ್ಗಾನ್ ಆಸ್ಪತ್ರೆಗೆ ಹೋಗಲು ಆತುರವಾಗಿದ್ದುದರಿಂದ ತಮ್ಮ ಪರೀಕ್ಷೆಯ ವಿವರಗಳನ್ನೂ, ನಾಗರಾಜ್ ನೋವು ಎನ್ನುತ್ತಿದ್ದ ಭಾಗಗಳನ್ನೂ ಸೂಚಿಸಿ, ಎಕ್ಸ್-ರೇಗೆ ಶಿಫಾರ್ಸು ಮಾಡಿದರು.

### ಹೊಡೆತ?

ಜನತಾ ಪಕ್ಷದ ಮುಖಂಡ, ಖ್ಯಾತ ವಕೀಲರಾದ ಮೀಗ ಚಂದ್ರಶೇಖರ್ ಹೇಳುತ್ತಾರೆ— "ಲಕ್ಷ್ಮಣ್ ಈ ವರೆಗೆ ಒಳ್ಳೆಯ ಕೆಲಸ ಮಾಡಿದ್ದಾರೆ. ಎಲ್ಲಾ ತರದ ಪುಂಡಾಟಿಕೆಗೆ ಕಡಿವಾಣ ಹಾಕಿದ್ದಾರೆ. ಆದರೆ ಈ ಪ್ರಕರಣದಲ್ಲಿ ಮಾತ್ರ ಅವರ ನಡವಳಿಕೆಯನ್ನು ನಾನು ಒಪ್ಪುವುದಿಲ್ಲ. ನನಗೆ ನಾಗರಾಜ್ ಪರಿಚಯ ಕೂಡ ಇರಲಿಲ್ಲ. ಮಡಬೂರಿನವರಂತೆ. ಕಾಫಿತೋಟ ಮಾಡ್ತಾರಂತೆ ಅಂತ ಮಾತ್ರ ಗೊತ್ತಿತ್ತು. ಠಾಣೆಯೊಳಗೆ ಏನು ನಡೆಯಿತೆಂದು ನನಗೆ ಗೊತ್ತಿಲ್ಲ. ಆದರೆ, ಅಷ್ಟು ಉನ್ನತ ಮಟ್ಟದ ವಿದ್ಯಾವಂತನನ್ನ ರಸ್ತೆಯಲ್ಲಿ ಸಾರ್ವಜನಿಕವಾಗಿ ಹೊತ್ತುಕೊಂಡು ಹೋದದ್ದು, ಇಬ್ಬರು ಎಸ್ಸೈಗಳೂ ಹೊಡೆಯುತ್ತಾ ಒದೆಯುತ್ತಾ ಹೋದದ್ದು ಯಾರೂ ಒಪ್ಪುವಂಥದಲ್ಲ. ಆಸ್ಪತ್ರೆಯಲ್ಲೂ ಸಿಕ್ಕಾಪಟ್ಟೆ ಹೊಡೆದು ದೌರ್ಜನ್ಯ ಮಾಡಿದರಂತೆ. ಜನ ಬಂದು 'ಏನು ಸ್ವಾಮಿ, ಊರಲ್ಲಿ ಯಾರೂ ಹೇಳುವವರು ಕೇಳುವವರು ಇಲ್ಲವೆ?' ಎಂದು ಹೇಳಿದಾಗ, ಎಂದೂ ಈ ವಿಷಯದಲ್ಲಿ ತಲೆ ಹಾಕದವನು, ಅವತ್ತು ಠಾಣೆಗೆ ಹೋಗಿ, 'ಇದೆಲ್ಲ ಚೆನ್ನಾಗಿಲ್ಲ. ಬೇಗ ಅವರನ್ನು ನ್ಯಾಯಾಧೀಶರ ಮುಂದೆ ಹಾಜರ್ಪಡಿಸಿ' ಎಂದು ಹೇಳಿಬಂದೆ. ಈ ಪ್ರಕರಣದಲ್ಲಿ ಲಕ್ಷ್ಮಣ್ ಜನರ ಸಹಾನುಭೂತಿ ಸಂಪೂರ್ಣ ಕಳೆದುಕೊಂಡರು."

ತಾ|| ಕಾಂಗ್ರೆಸ್ ಅಧ್ಯಕ್ಷ ಅಬ್ದುಸ್ ಸಮದ್: "ಲಕ್ಷ್ಮಣ್ ಬಗ್ಗೆ ನಮ್ಮದು ಈ ವರೆಗೆ ಏನೂ ಆಕ್ಷೇಪಣೆ ಇಲ್ಲ. ಕುಡಿದು ಗಲಾಟೆ ಮಾಡುವುದು, ದೊಂಬಿ, ಹೊಡೆತ—ಬಡಿತ ಎಲ್ಲ ಹತೋಟಿಗೆ ತಂದಿದ್ದಾರೆ. ಬಡವರಿಗೆ ಯಾವತ್ತೂ ನ್ಯಾಯ ಕೊಟ್ಟಿದ್ದಾರೆ. ಆದರೆ ಈ ವಿಷಯದಲ್ಲಿ ಮಾತ್ರ ಸ್ವಲ್ಪ ದುಡುಕಿದರು ಅನ್ನಿಸುತ್ತೆ—ಅದೂ ಡಾಕ್ಟರು ಹೇಳಿದ್ದನ್ನು ಕೇಳಿ ನಾನು ಹೇಳುತ್ತಿರುವುದು. ಲಕ್ಷ್ಮಣರನ್ನು ನಾನೇನೂ ಮಾತಾಡಿಸಿಲ್ಲ."

ಲಾಯರ್ ಸುಬ್ಬಣ್ಣನವರು: ಇಷ್ಟು ದಿನ ಎಸ್ಸೈ ಏನು ಮಾಡಿದ್ದಾರೆಂಬುದು ನನಗೆ ಅಷ್ಟು ಗೊತ್ತಿಲ್ಲ. ಗಲಾಟೆ, ದೊಂಬಿ ಎಲ್ಲ ನಿಲ್ಲಿಸಿದ್ದಾರೆ ಮುಂತಾದ ವಿಷಯಗಳಿಗೂ ನನಗೂ ಅಷ್ಟು ಸಂಪರ್ಕ ಬರುವುದಿಲ್ಲ. ಆದರೆ ಮರ್ಯಾದಸ್ಥರನ್ನೆಲ್ಲ ಹೀಗೆ ಮುಖ ಮೋರೆ ನೋಡದೆ ಥಳಿಸುವುದನ್ನು ನಾನು ಒಪ್ಪುವುದಿಲ್ಲ...."

ಡಾ|| ಉಮೇಶ್ ಹೆಗ್ಡೆ ಮತ್ತು ಪುರಸಭಾಧ್ಯಕ್ಷ ವರ್ಗೀಸ್ ನಮ್ಮ ನ. ೭ರ ವರದಿಗೆ ತೀವ್ರ ಆಕ್ಷೇಪಣೆ ಮಾಡಿದರು. "ಸಿಕ್ಕಾಪಟ್ಟೆ ಹೊಡೆದಿದ್ದನ್ನು ಇಷ್ಟೆಲ್ಲ ಜನ ನೋಡಿದ್ದಾರೆ. ನಿಮ್ಮ ವರದಿಯಲ್ಲಿ ಅದರ ಸುದ್ದಿಯೇ ಇಲ್ಲವಲ್ರಿ?" "ಹೌದು, ಹೊಡೆದಿದ್ದಾರೆಂಬುದು ಗೊತ್ತಾಗುತ್ತಿದೆ. ಆದರೆ ಇಷ್ಟು ದೊಡ್ಡ ವಿದ್ಯಾವಂತನನ್ನು ಏನೂ ಕಾರಣವಿಲ್ಲದೆ ಹಾಗೆಲ್ಲ ಹೊಡೆಯಲು ಸಾಧ್ಯವಿಲ್ಲ ಅಲ್ಲವೆ? ಯಾಕೆ ಹೊಡೆದರು? ಪ್ರಚೋದನೆ ಏನಿತ್ತು ಎಂದು ನಿಮಗೆ ಅನಿಸುತ್ತೆ? ಅವರಿಗೇನು ಹೊಡೆಯುವುದೆ ಕೆಲಸವೆ?" ಎಂದು ಕೇಳಿದ್ದಕ್ಕೆ, "ಹೌದು, ಅವರಿಗೆ ಹೊಡೆಯುವುದೇ ಕೆಲಸ. ಇನ್ನೇನಿದೆ?" ಎಂದು ವರ್ಗೀಸ್ ಹೇಳಿದರು. ಡಾ|| ಹೆಗ್ಡೆ ಉತ್ತರಕ್ಕೆ ಹುಡುಕುವವರಂತೆ ಸುಮ್ಮನಿದ್ದರು.

ಆಸ್ಪತ್ರೆಯಲ್ಲಿ ಸ.ಇ. ನಾರಾಯಣ ಸ್ವಾಮಿ ನಾಗರಾಜರಿಗೆ ಹೊಡೆದು, ಅವರು ಕೂಗತೊಡಗಿದಾಗ 'ಬಾಯಿ ಮುಚ್ಚು' ಎನ್ನುತ್ತಾ ಬಾಯಿಗೆ ದೊಣ್ಣೆ ಹೆಟ್ಟಿದರು ಎಂದು

(೪ನೇ ಪುಟಕ್ಕೆ)

## 'ಖದೀಮ ಕಳ್ಳರ ಬಿಡುಗಡೆ' ಬ್ಯಾಂಕ್ ಮ್ಯಾನೇಜರ ವಿವರಣೆ

ನ.ರಾ.ಪುರ: ನ.೭ರ 'ಮುಂಜಾವು'ನಲ್ಲಿ ಪ್ರಕಟವಾದ "ಖದೀಮ ಕಳ್ಳರು" ಬಿಡುಗಡೆ ಎಂಬ ಪತ್ರಕುರಿತು ನ.ರಾ.ಪುರದ ಮೈಸೂರು ಬ್ಯಾಂಕ್ ಮ್ಯಾನೇಜರರು ಒಂದು ವಿವರಣೆ ನೀಡಿದ್ದಾರೆ.

"ಬ್ಯಾಂಕಿನ ಮುಖ್ಯ ದ್ವಾರದಲ್ಲಿ ಗ್ರಿಲ್ ಗೇಟು ಮತ್ತು ಮರದ ಬಾಗಿಲುಗಳಿದ್ದು ಕಾವಲುಗಾರ ಅದರ ಒಳಾಂಗಣದಲ್ಲಿಯೇ ಇರಬೇಕು. ರಾತ್ರಿ ೧೦ ರಿಂದ ಬೆಳಗಿನ ೬ರ ವರೆಗೆ ಮ್ಯಾನೇಜರೇ ಬಂದರೂ ಬಾಗಿಲು ತೆರೆಯುವಂತಿಲ್ಲ. ಹೊರಗೆ ಹೋಗುವಂತಿಲ್ಲ.

ಆದ್ದರಿಂದ ಅ. ೨೭ರ ರಾತ್ರಿ ಕೈದಿಗಳು ಪರಾರಿಯಾಗುವುದನ್ನು ಒಂದು ವೇಳೆ ನೋಡಿದ್ದರೂ ಏನೂ ಉಪಯೋಗವಾಗುತ್ತಿರಲಿಲ್ಲ. ಕಾವಲುಗಾರರು ಎಚ್ಚರಾಗಿಯೇ ಇರುತ್ತಾರೆ" ಎಂದು ಅವರು ತಿಳಿಸಿದ್ದಾರೆ.

### ಸ್ಟೈಪೆಂಡರಿಗಳ ಮುಷ್ಕರ

ಕೊಪ್ಪ: ಸ್ಟೈಪೆಂಡಿಯರಿ ಪದವೀಧರರು ರಾಜ್ಯಾದ್ಯಂತ ಒಂದು ದಿನದ ಸಾಂಕೇತಿಕ ಉಪವಾಸ ಮುಷ್ಕರವನ್ನು ನ. ೧೯ರಂದು ನಡೆಸಿದರು ಕೊಪ್ಪ ತಾ|| ಕಚೇರಿ ಎದುರು ನಡೆದ ಮುಷ್ಕರದಲ್ಲಿ ತಾಲ್ಲೂಕಿನ ಎಲ್ಲ ಸ್ಟೈಪೆಂಡಿಯರಿಗಳೂ ಭಾಗವಹಿಸಿದ್ದರೆಂದು ತಿಳಿದು ಬಂದಿದೆ.



# ನರಸಿಂಹರಾಜಪುರದ ಪ್ರಕರಣ

(೩ನೇ ಪುಟದಿಂದ)

ಹಲವಾರು ಜನ ಹೇಳಿದ್ದಾರೆ. ಆದರೆ ರಸ್ತೆಯಲ್ಲಿ ಹೊತ್ತುಕೊಂಡು ಹೋಗುವಾಗ ಹೊಡೆಯುತ್ತಿರಲಿಲ್ಲವೆಂದು ಅಲ್ಲಿನ ಅಂಗಡಿಗಳವರು ಹೇಳುತ್ತಾರೆ. ಓಡಿಹೋದವರನ್ನು ಠಾಣೆಗೆ ತೆಗೆದುಕೊಂಡು ಹೋದ ನಂತರ ಸಹ ಠಾಣೆಯಲ್ಲಿ ಹೊಡೆದಿರುವ ಸಾಧ್ಯತೆ ಇದೆ. ಆದರೆ ಇದಕ್ಕೆ ಸರಿಯಾದ ಪುರಾವೆ ಸಿಗುವುದಿಲ್ಲ.

ಇಲ್ಲಿ ಇನ್ನೊಂದು ಅಂಶವೆಂದರೆ ಸ.ಇ. ನಾರಾಯಣ ಸ್ವಾಮಿ ಸಂಯಮ ಕಳೆದುಕೊಂಡರು ಎಂಬುದು ಹಾಗೂ, ಪ್ರತ್ಯಕ್ಷದರ್ಶಿಗಳ ಪ್ರಕಾರ, ಹೆಚ್ಚು ಹೊಡೆದವರು ಅವರೇ ಎಂಬುದು. ಅವರು ಅಷ್ಟು ಸಂಯಮ ಕಳೆದುಕೊಳ್ಳಲು ಎರಡು ಕಾರಣ ಹೇಳಲಾಗುತ್ತಿದೆ—ತಾನು ನಾಗರಾಜರನ್ನು ಅಷ್ಟೆಲ್ಲ ಮಾನನೀಯತೆಯಿಂದ ಉಪಚರಿಸುತ್ತಿದ್ದರೂ ಎಷ್ಟು ಓಡಿ ಹೋದದ್ದು ಹಾಗೂ ನಡೆಯಬಾರದ್ದು ಒಪ್ಪದೆ, ಪೋಲೀಸರು ಅವರನ್ನು ಹೊತ್ತುಕೊಂಡು ಹೋಗಬೇಕಾಗಿ ಬಂದು ಅದರಿಂದ ಜನರ ದೃಷ್ಟಿಯಲ್ಲಿ ಪೋಲೀಸರು ಕ್ರೂರವಾಗಿ, ಅಪಹಾಸ್ಯಕರವಾಗಿ ಕಾಣುವಂತೆ ಆದದ್ದು.

ಆದರೆ ನಾರಾಯಣ ಸ್ವಾಮಿಯವರು ತಾವು ಹಾಗೆಲ್ಲ ಹೊಡೆದಿಲ್ಲವೆಂದೇ ಹೇಳುತ್ತಾರೆ. "ಒಬ್ಬ ವಿದೇಶಕ್ಕೆ ಹೋಗಿ ಬಂದಂಥ ವಿದ್ಯಾವಂತ ಪೋಲೀಸ್ ಠಾಣೆಯಿಂದ ಹಾಗೆ ಓಡಿ ಹೋಗುವುದಾದರೆ ಆತನ ಮಟ್ಟ ಎಷ್ಟಿರಬೇಕು ಯೋಚಿಸಿ' ಎನ್ನುವ ಅವರು, ಪೋಲೀಸರ ಮೇಲೆ ಇಷ್ಟೊಂದು ಒತ್ತಡ, ಅವರ ಕೆಲಸದಲ್ಲಿ ಇಷ್ಟೊಂದು ತಲೆಹಾಕುವಿಕೆ ನಡೆದರೆ, ಸಾಮಾಜಿಕವಾಗಿ ಈಗಾಗಲೇ ಹೆಚ್ಚೂ ಕಮ್ಮಿ ನಿಸ್ಸಹಾಯರಾಗಿರುವ ಪೋಲೀಸರು ಕೇವಲ ಸಂಬಳ ಎಣಿಸಿಕೊಳ್ಳುವಷ್ಟಕ್ಕೆ ಮಾತ್ರ ಉಳಿಯುತ್ತಾರೆ.' ಎನ್ನುತ್ತಾರೆ.

**ಸುಮ್ ಸುಮ್ನೆ ಹೊಡೆಯುತ್ತಾರಾ?**

ಗೂಡಂಗಡಿಯ ಒಬ್ಬರು ಮುದುಕರು ಹೇಳಿದರು—"ಹಾಗೆಲ್ಲ ಸುಮ್ ಸುಮ್ನೆ ಯಾರಾರೂ ಹೊಡಿತಾರಾ ಸ್ವಾಮಿ? ಈ ಇನಿಸ್ಪೆಟ್ರಂತೂ ಅಂಥವರಲ್ಲ. ಏನೋ ನಡೆದಿರಬೇಕು. ಹಾಗಂತ, ಹೊಡೆದಿದ್ದು ಹೌದಂತೆ."

ಬಾಳೆ ಗ್ರಾಮದ ಒಬ್ಬರು ಬಡ ರೈತರು ಹೇಳಿದರು—"ನೋಡಿ ಸ್ವಾಮಿ, ಈ ಎಸ್ಸೈ ಶ್ರೀಮಂತ್ರ ಮುಲಾಜಿಗ್ಹೋಗು ಜನ ಅಲ್ಲ. ಕಂಪ್ಲೇಂಟ್ ಬಂದ್ರೆ ಅವರು ಯಾರಿಗೂ ಕೇರ್ ಮಾಡ್ತಿಲ್ಲೆ. ಅವ್ರನ್ನ ಹ್ಯಾಂಗಾರೂ ಎತ್ತಿ ಹಾಕುಕು ಅಂತ ದೊಡ್‌ದೊಡ್ಡೋರೆಲ್ಲ ಮಾಡ್ಕಂಡೀರು, ಅಷ್ಟೇಯ, ಮತ್ತೇನಿಲ್ಲೆ. ಈ ಎಸ್ಸೈ ಹಾಂಗೆಲ್ಲ ನ್ಯಾಯ ಬಿಟ್ ಹೋಪರಲ್ಲೆ."

ನ.ರಾ.ಪುರ ಭೂ ಬ್ಯಾಂಕ್ ಅಧ್ಯಕ್ಷರೂ, ಹಿರಿಯ ಕಾಂಗ್ರೆ ಮುಖಂಡರೂ ಡಾ|| ನಾಗರಾಜರ ಖಾಸಾ ಸಂಬಂಧಿಯೂ ಆದ ಹೆಚ್. ಪಿ. ಶ್ರೀನಿವಾಸಗೌಡರ ಪ್ರಕಾರ ನಾಗರಾಜ್ ಬಹಳ ಬುದ್ಧಿವಂತರು. ಒಳ್ಳೇ ಶಿಸ್ತಿನವರು. ದಿನಾ ಬೆಳಿಗ್ಗೆ ಯೋಗಾಸನ, ವ್ಯಾಯಾಮ ಎಲ್ಲ ಮಾಡಿ ದೇಹವನ್ನು ಗಟ್ಟಿಯಾಗಿಟ್ಟುಕೊಂಡವರು. "ನಾವೆಲ್ಲ ಊರವರು ಸೇರಿ ಬೇರೆ ಜನರನ್ನು ಓದಿಸಿದ್ದು. ಆದರೆ ಈಗ ಜನಿವಾಸ ಮಾಡಲಿಕ್ಕೆ ಅಂತ ಊರಿಗೆ ಬಂದ ಮೇಲೆ ನಾನೇ ಕೆಟ್ಟವನಾಗಿ ಬಿಟ್ಟಿದ್ದೇನೆ. ಊರಿನಲ್ಲಿ ಎರಡು ಪಾರ್ಟಿ ಆಗಿಬಿಟ್ಟಿದೆ. ದಿನ ಬೆಳಗಾದರೆ ಕಂಪ್ಲೇಂಟು, ಕೇಸನ್ನು, ಕೋರ್ಟು—ಇದೇ ಆಗಿದೆ."

ನಾಗರಾಜ್ ತಿಮ್ಮೇಗೌಡರ ವಿರುದ್ಧವೂ ಕೆಲ ಸಮಯದ ಹಿಂದೆ ಪೋಲೀಸಿಗೆ ದೂರು ಕೊಟ್ಟಿದ್ದರು. ಅದಕ್ಕೆ ಪ್ರತಿಯಾಗಿ —ಎಂಥದ್ದೂ ಯಾರ ಮೇಲೂ ದೂರು ಬರೆಯದ— ಗೌಡರೂ ದೂರು ಕೊಟ್ಟು, ಊರಿನ ಶಾಂತಿ ಕಾಪಾಡುವಂತೆ ಕೋರಿದ್ದರು. ಇಬ್ಬರನ್ನೂ ಕರೆಸಿ ಎಸ್ಸೈ ವಿಚಾರಣೆ ನಡೆಸಿ, ಇಬ್ಬರಿಂದಲೂ ಮುಚ್ಚಳಿಕೆ ಬರೆಸಿಕೊಂಡಿದ್ದರು.

ನಾಗರಾಜರ ಆಪ್ತರಾದ ಪದ್ಮಾಕರ ತಮ್ಮಯ್ಯರೆಲ್ಲೇ ಲಕ್ಷ್ಮಣ್ ನಾಗರಾಜರಿಗೆ ಥಳಿಸಿದ್ದಾಗಿ ಹೇಳುತ್ತಾರೆ. ಆದರೇನೂ ಲಕ್ಷ್ಮಣ್ ಮೇಲೆ ಹಲ್ಲೆಮಾಡಲಿಲ್ಲವಂತೆ. ಲಕ್ಷ್ಮಣ್ ನಾಗರಾಜರಿಗೆ "ಬ್ರೂಟ್", "ಬಾಸ್ಟರ್ಡ್" ಎಂಬ ಪದಗಳನ್ನು ಬಳಸಿದಾಗ "ಆ ಮಾತುಗಳನ್ನು ಹಿಂದಕ್ಕೆ ತೆಗೆದುಕೊಳ್ಳಿ" ಎಂದು ಹೇಳಿದ್ದಕ್ಕೇ ಲಕ್ಷ್ಮಣ್ ಥಳಿಸಿದರಂತೆ. ನಾಗರಾಜರೇನೂ ಬಿದ್ದು ಪೆಟ್ಟಾಗಿದ್ದಲ್ಲವಂತೆ.

### ಶಾಲಾ ಮಕ್ಕಳ ಮೆರವಣಿಗೆ

ನ. ೨ರಂದು ಕೆಲವರು ಲಕ್ಷ್ಮಣ್ ಮತ್ತು ಧನಂಜಯ ಪಾಂಡು ವಿರುದ್ಧ ಮೆರವಣಿಗೆ ನಡೆಸಲು ಕಿರಿಯ ಕಾಲೇಜನ್ನೂ, ಪ್ರಾಥಮಿಕ ಶಾಲೆಗಳನ್ನೂ ಬಿಡಿಸಿದರು. ಈ ಬಗ್ಗೆ ಸ|| ವಿದ್ಯಾಧಿಕಾರಿಗಳಿಂದ ಯಾವುದೇ ಅನುಮತಿ ಪಡೆದಿರಲಿಲ್ಲವಂತೆ. ಶಾಲಾ ಮುಖ್ಯೋಪಾಧ್ಯಾಯರೊಬ್ಬರು "ಶಾಲೆ ಬಿಡಲು ಸಾಧ್ಯವಿಲ್ಲ. ಮೇಲಿನವರ ಅನುಮತಿ ಬೇಕು" ಎಂದಾಗ ಏಳೆಂಟು ಜನ ಬಲವಂತವಾಗಿ ಒಳಗೆ ನುಗ್ಗಿ ಮಕ್ಕಳನ್ನು ಕರೆದುಕೊಂಡು ಹೋದರೆಂದು ತಿಳಿಸಿದ್ದಾರೆ.

### ಹಿನ್ನೆಲೆಯಲ್ಲಿ....

ಈ ಇಡೀ ಪ್ರಕರಣಕ್ಕೆ ಹಿನ್ನೆಲೆ ಮಡಬೂರು. ನಾಲ್ಕೂವರೆ ವರ್ಷ ಇಂಗ್ಲೆಂಡಿನಲ್ಲಿ ವ್ಯಾಸಂಗ, ವೃತ್ತಿ ಮಾಡಿ ಬಂದು ಮೈಸೂರಲ್ಲಿ ಔಷಧಾಲಯ, ರಕ್ತ ಬ್ಯಾಂಕು ಮುಂತಾದುವನ್ನು ನಡೆಸಿ ಒಳ್ಳೆಯ ಸಂಪಾದನೆ ಮಾಡಿರುವ ಡಾ|| ನಾಗರಾಜ್ ಊರಲ್ಲಿ ೧೫ ಎಕರೆ ಕಾಫಿಗೆ ದರ್ಖಾಸ್ತು ಮಾಡಿ (ಸ. ನಂ. ೪೦), ಪಕ್ಕದಲ್ಲಿ ನಾಲ್ಕೈದು ಕೂಲಿ ಕಾರ್ಮಿಕರು ೧೦ ವರ್ಷಗಳಿಂದಲೂ ದರ್ಖಾಸ್ತು ಕೊಟ್ಟು ಗುಡಿಸಲು ಹಾಕಿಕೊಂಡಿದ್ದ ಜಾಗವನ್ನು ಒತ್ತುವರಿ ಮಾಡಲು ಯತ್ನಿಸಿದರೆಂದೂ, ಆಗ ಕೂಲಿ ಕಾರ್ಮಿಕರು ಸಂಘ ಸ್ಥಾಪಿಸಿಕೊಂಡು ಭೂಮಿ ಉಳಿಸಿಕೊಳ್ಳಲು ಹೋರಾಟಕ್ಕಿಳಿದರೆಂದೂ ಹೇಳಲಾಗಿದೆ. ಅವರನ್ನು ಮಟ್ಟ ಹಾಕಲು ಹಾಗೂ ಬೇಲಿ—ಗೀಲಿ ಅಂತ ಕೆಲವು ಸಂಬಂಧಿಕರಿಂದ ಬಂದ ಸಣ್ಣ ವಿರೋಧವನ್ನು ಅಡಗಿಸಲು ಪೋಲೀಸು ಕಂಪ್ಲೇಂಟುಗಳು ಮುಂತಾದುವೆಲ್ಲ ಶುರುವಾಗಿ ಈ ಪ್ರಕರಣದ ಪರ್ಯವಸಾನವಾಯಿತೆಂದು ಹೇಳಲಾಗಿದೆ. ನಾಗರಾಜ್ ಈ ಹಿಂದೆ ಕೂಡ ಹಲವಾರು ಕ್ರಿಮಿನಲ್ ಪ್ರಕರಣಗಳಲ್ಲಿ ಒಳಗಾಗಿದ್ದಾರೆಂದೂ ಹೇಳಲಾಗಿದೆ.

### ನಿಜಸ್ಥಿತಿ ಏನಿರಬಹುದು?

ಈ ಎಲ್ಲ ಅಭಿಪ್ರಾಯಗಳನ್ನು ಪರಿಶೀಲಿಸಿದಾಗ ಕೆಲವು ಪ್ರಶ್ನೆಗಳು ಏಳುತ್ತವೆ: ಲಕ್ಷ್ಮಣ್ ಬಡಬಗ್ಗರನ್ನೂ ಮರ್ಯಾದಸ್ಥರನ್ನೂ ಹೊಡೆಯುತ್ತಿದ್ದರೆ? ಅವರು ಬಂದು ಈ ಒಂದೂವರೆ ವರ್ಷದಲ್ಲಿ ಗಂಧ, ನಾಟ ಮುಂತಾದ ಕಳ್ಳ ಸಾಗಾಣಿಕೆ, ಮಟ್ಕಾ, ದೊಂಬಿ, ಕೊಲೆ, ಸಾರ್ವಜನಿಕವಾದ ಹಲ್ಲೆ—ಹೊಡೆದಾಟ ಇವೆಲ್ಲ ಹದ್ದುಬಸ್ತಿಗೆ ಬಂದದ್ದು ನಿಜವೆ? ನಿಜವಾಗಿದ್ದರೆ ಅದನ್ನು ಊರಿನ ಗಣ್ಯರೆಲ್ಲ ಮೆಚ್ಚುತ್ತಾರೆಯೆ? ಹಾಗಾದರೆ ಲಕ್ಷ್ಮಣರ ವರ್ಗಾವಣೆಗೆ ಈಚೆಗೆ ಭಾರಿ ಕೋಲಾಹಲಕರ ಪ್ರಯತ್ನಗಳು ನಡೆದು, ಸೂಕ್ಷ್ಮ ಮನಸ್ಸಿನ ಪ್ರಜ್ಞಾವಂತ ಹೀಗ ಚಂದ್ರಶೇಖರ್ ಕ್ಷೇತ್ರ ಜನತಾ ಅಧ್ಯಕ್ಷ ಪದವಿಗೆ ರಾಜೀನಾಮೆ ಸಲ್ಲಿಸಿದ್ದಲ್ಲ ಅದು ಯಾರಿಂದ? ಇಷ್ಟು ಎಚ್ಚರಿಕೆಯ ಊರಿನಲ್ಲಿ ಕಾರಣವಿಲ್ಲದೆ ಒಬ್ಬ ದೊಡ್ಡ ವಿದ್ಯಾವಂತ, ಗಣ್ಯ ಶ್ರೀಮಂತನನ್ನು ಥಳಿಸಲು ಪೋಲೀಸರಿಗೆ ಧೈರ್ಯಬಂದೀತೆ? ಪೋಲೀಸರು, ಮುಖ್ಯವಾಗಿ ಲಕ್ಷ್ಮಣ್ ಜನರ ಸಹಾನುಭೂತಿ ಕಳೆದುಕೊಂಡರೆ? ಹಾಗಾದರೆ, ಅವರನ್ನು ವರ್ಗಮಾಡಿದರೆ ಉಪವಾಸ ಸತ್ಯಾಗ್ರಹ ಮಾಡುತ್ತೇವೆಂಬ ಬೆಸ್ತರ ಬೆದರಿಕೆ, ಆಮೇಲೆ ಲಕ್ಷ್ಮಣ್ ಪರ ಚಳುವಳಿಯತ್ನ, ಅವರ ವಿರುದ್ಧ ಚಳುವಳಿಗೆ ಜನ ಸಾಕಷ್ಟು ಸಂಖ್ಯೆಯಲ್ಲಿ ಸೇರದಿದ್ದುದು (ಶಾಲಾ ಮಕ್ಕಳನ್ನು ಕರೆದುಕೊಂಡದ್ದು) ಇವೆಲ್ಲದರ ಅರ್ಥ ಏನು?

**ಲಕ್ಷ್ಮಣ್‌ಗೆ ವರ್ಗವಾದರೆ ಏನೆಲ್ಲ ಆಗಬಹುದು — ಊರಲ್ಲಿ ನೆಮ್ಮದಿ ನೆಲೆಸಬಹುದೆ?**



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀನಪಟಿಗೆ ಅಚ್ಚುಕೂಟ, ಕೊಪ್ಪ